## THE KARNATAKA LEGISLATURE SALARIES, PENSIONS AND ALLOWANCES (SECOND AMENDMENT) ACT, 2012

(Received the assent of the Governor on the eleventh day of January, 2013)

An Act further to amend the Karnataka Legislature Salaries, Pensions and Allowances Act, 1956.

Whereas it is expedient further to amend the Karnataka Legislature Salaries, Pensions and Allowances Act, 1956 (Karnataka Act 2 of 1957) for the purposes hereinafter appearing;

Be it enacted by the Karnataka State Legislature in the Sixty -third year of the Republic of India, as follows:-

***1. Short title and commencement.-*** (1) This Act may be called the Karnataka Legislature Salaries, Pensions and Allowances (Second Amendment) Act, 2012.

(2) It shall come into force at once.

***2. Amendment of section 11A.-*** In section 11A of the Karnataka Legislature Salaries, Pensions and Allowances Act, 1956 (Karnataka Act 2 of 1957), in sub-section (1), after the fourth proviso, the following shall be inserted, namely:-

> "Provided also that where the election of a person is set aside by the Court in an election petition due to technical reasons not attributed to such person and for this reason was not able to serve as a member during the period of five years, shall be deemed irrespective of the period of actual service, to have served as a member for five years.
>
> ***Explanation.-*** For the purpose of this proviso technical reason means inclusion of certain voters in the voter list after the issue of notification of election by the Election Commission of India."

By Order and in the name of the Governor of Karnataka,

***G.K. BOREGOWDA***
Secretary to Government,
Department of Parliamentary Affairs and Legislation


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – ***IV-A*** | ಬೆಂಗಳೂರು, ಮಂಗಳವಾರ, ಜನವರಿ ೧೫, ೨೦೧೩ (ಪುಷ್ಯ ೨೫, ಶಕ ವರ್ಷ ೧೯೩೪) | ನಂ. ೪೫ |
| ***Part – IV-A*** | ***Bangalore, Tuesday, January 15, 2013 (Pushya 25, Shaka Varsha 1934)*** | ***No. 45*** |


## *PARLIAMENTARY AFFAIRS AND LEGISLATION SECRETARIAT*

### *NOTIFICATION*

***No. DPAL 06 SAMVYAVI 2012, Bangalore, Dated : 15.01.2013***

The following Order made by the Governor is hereby published for general information:-

***"ORDER - I***

In exercise of the powers conferred upon me by sub-clause (a) of clause (2) of Article 174 of the Constitution of India, I, H.R.Bhardwaj, Governor of Karnataka, do hereby prorogue the Karnataka Legislative Council.

***H.R. BHARDWAJ***
***GOVERNOR OF KARNATAKA"***

By order and in the name of the Governor of Karnataka,

***G.K. BOREGOWDA***
Secretary to Government
Department of Parliamentary Affairs and Legislation

## *PARLIAMENTARY AFFAIRS AND LEGISLATION SECRETARIAT*

***NOTIFICATION***

***No. DPAL 06 SAMVYAVI 2012, Bangalore, Dated : 15.01.2013***

The following Order made by the Governor is hereby published for general information:-

***"ORDER - II***

In exercise of the powers conferred upon me by sub-clause (a) of clause (2) of Article 174 of the Constitution of India, I, H.R.Bhardwaj, Governor of Karnataka, do hereby prorogue the Karnataka Legislative Assembly.

***H.R. BHARDWAJ***
***GOVERNOR OF KARNATAKA"***

By order and in the name of the Governor of Karnataka,

***G.K. BOREGOWDA***
Secretary to Government
Department of Parliamentary Affairs and Legislation

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| **ಭಾಗ – *IV-A*** | **ಬೆಂಗಳೂರು, ಮಂಗಳವಾರ, ಜನವರಿ ೧೫, ೨೦೧೩ (ಪುಷ್ಯ ೨೫, ಶಕ ವರ್ಷ ೧೯೩೪)** | **ನಂ. ೪೬** |
| ***Part – IV-A*** | ***Bangalore, Tuesday, January 15, 2013 (Pushya 25, Shaka Varsha 1934)*** | ***No. 46*** |

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 69 ಶಾಸನ 2012, ಬೆಂಗಳೂರು, ದಿನಾಂಕ: 15.01.2013**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಕಾಲೇಜು ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ವಿಧೇಯಕ, 2012ಕ್ಕೆ 2013 ರ ಜನವರಿ ಹತ್ತನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 6 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2013 ರ ಕರ್ನಾಟಕ ಅಧಿನಿಯಮ ಸಂಖ್ಯೆ: 6**

(2013ರ ಜನವರಿ ಮಾಹೆಯ ಹದಿನೈದನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಕಾಲೇಜು ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2012**

(2013ರ ಜನವರಿ ಮಾಹೆಯ ಹತ್ತನೇ ದಿನಾಂಕದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ)

ಕರ್ನಾಟಕ ರಾಜ್ಯದಲ್ಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಪ್ರಾಂಶುಪಾಲರು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯ ಲಭ್ಯತೆಯನ್ನು ಖಚಿತಪಡಿಸಿಕೊಳ್ಳಲು ಕಾಲೇಜು ಶಿಕ್ಷಣ ಇಲಾಖೆಯ ಪ್ರಾಂಶುಪಾಲರು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯ ವರ್ಗಾವಣೆಯನ್ನು ನಿಯಂತ್ರಿಸುವುದಕ್ಕಾಗಿ ಉಪಬಂಧ ಕಲ್ಪಿಸಲು ಒಂದು ಅಧಿನಿಯಮ.

ಕರ್ನಾಟಕ ರಾಜ್ಯದ್ಯಂತ ಇರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಪ್ರಾಂಶುಪಾಲರು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯ ಲಭ್ಯತೆಯ ಪಾರದರ್ಶಕತೆಯನ್ನು ಖಚಿತಪಡಿಸಿಕೊಳ್ಳಲು ಕಾಲೇಜು ಶಿಕ್ಷಣ ಇಲಾಖೆಯ ಪ್ರಾಂಶುಪಾಲರು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯ ವರ್ಗಾವಣೆಯನ್ನು ನಿಯಂತ್ರಿಸುವುದಕ್ಕಾಗಿ ಮತ್ತು ಅದಕ್ಕೆ ಸಂಬಂಧಿಸಿದ ಅಥವಾ ಅವುಗಳಿಗೆ ಪ್ರಾಸಂಗಿಕವಾದ ವಿಷಯಗಳಿಗಾಗಿ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ಮೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು, ಅನ್ವಯ ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಕಾಲೇಜು ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2012 ಎಂದು ಕರೆಯತಕ್ಕದ್ದು.

(2) ಈ ಅಧಿನಿಯಮದ ಉಪಬಂಧಗಳು ನಿರ್ದೇಶಕರು, ಅಪರ ನಿರ್ದೇಶಕರು, ಜಂಟಿ ನಿರ್ದೇಶಕರು, ಉಪ ನಿರ್ದೇಶಕರ ಹುದ್ದೆಯನ್ನು ಹೊರತುಪಡಿಸಿ ಕಾಲೇಜು ಶಿಕ್ಷಣ ಇಲಾಖೆಯ ಬೋಧಕ ಅಥವಾ ಬೋಧಕೇತರ ಸಿಬ್ಬಂದಿಗೆ ಅನ್ವಯವಾಗತಕ್ಕದ್ದು.

(3) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ನೇಮಕಾತಿ" ಎಂದರೆ, ನೇರ ನೇಮಕಾತಿ ಮೂಲಕ, ನಿಯುಕ್ತಿಯ ಮೂಲಕ ಅಥವಾ ಬಡ್ತಿಯ ಮೂಲಕ ನೇಮಕಾತಿ;

(ಬಿ) "ನೇಮಕಾತಿ ಪ್ರಾಧಿಕಾರ" ಎಂದರೆ, ಕರ್ನಾಟಕ ಕಾಲೇಜು ಶಿಕ್ಷಣ ಇಲಾಖೆ ಸೇವೆಯಲ್ಲಿನ ಯಾವುದೇ ಹುದ್ದೆಗೆ ನೇಮಕಾತಿ ಮಾಡಲು ಸಕ್ಷಮವಾದ ಸಂಬಂಧಪಟ್ಟ ಪ್ರಾಧಿಕಾರ;

(ಸಿ) "ಸಕ್ಷಮ ಪ್ರಾಧಿಕಾರ" ಎಂದರೆ, ಕಾಲೇಜು ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆ ಅಥವಾ ನೇಮಕಾತಿ ಆದೇಶಗಳನ್ನು ಹೊರಡಿಸಲು ಸಕ್ಷಮವಾದ ಪ್ರಾಧಿಕಾರ:

ಪರಂತು, ಪ್ರಾಂಶುಪಾಲರ ಸಂಬಂಧದಲ್ಲಿ ನೇಮಕಾತಿ ಅಥವಾ ವರ್ಗಾವಣೆ ಆದೇಶಗಳನ್ನು ಹೊರಡಿಸುವುದಕ್ಕೆ ಸರ್ಕಾರವು ಸಕ್ಷಮ ಪ್ರಾಧಿಕಾರವಾಗಿರತಕ್ಕದ್ದು. ಇತರ ಬೋಧಕ ಅಥವಾ ಬೋಧಕೇತರ ಸಿಬ್ಬಂದಿಗೆ ನೇಮಕಾತಿ ಅಥವಾ ವರ್ಗಾವಣೆ ಆದೇಶಗಳನ್ನು ಹೊರಡಿಸುವುದಕ್ಕೆ ಕಾಲೇಜು ಶಿಕ್ಷಣದ ಕಮೀಷನರರು ಸಕ್ಷಮ ಪ್ರಾಧಿಕಾರವಾಗಿರತಕ್ಕದ್ದು.

(ಡಿ) "ಪ್ರತಿ ನಿಯೋಜನೆ" ಎಂದರೆ, ಸಿಬ್ಬಂದಿಯು ಕಾರ್ಯನಿರ್ವಹಿಸುತ್ತಿರುವ ಕಾಲೇಜು ಶಿಕ್ಷಣ ಇಲಾಖೆಯ ಒಂದು ಕಚೇರಿ/ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಿಂದ ಪೂರ್ಣವಾಗಿ ಅಥವಾ ಭಾಗಶ:ವಾಗಿ ಆ ಸಿಬ್ಬಂದಿಯ ಸೇವೆಗಳನ್ನು ಲೀನ್ ಅನ್ನು ಪಲ್ಲಟ ಮಾಡದೇ ಮತ್ತೊಂದು ಕಚೇರಿ ಅಥವಾ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಪ್ರತಿನಿಯೋಜನೆ ಮಾಡುವುದು;

(ಇ) "ಸರ್ಕಾರಿ ಪ್ರಥಮ ದರ್ಜೆ ಕಾಲೇಜು" ಎಂದರೆ, ಯಾವುದೇ ಹೆಸರಿನಿಂದ ಕರೆಯಲಾಗುವ ರಾಜ್ಯ ಸರ್ಕಾರಕ್ಕೆ ಸೇರಿದ ಎಲ್ಲಾ ಪ್ರಥಮ ದರ್ಜೆ ಕಾಲೇಜುಗಳು;

(ಎಫ್) "ಬೋಧಕೇತರ ಸಿಬ್ಬಂದಿ" ಎಂದರೆ, ರಾಜ್ಯ ಸಿವಿಲ್ ಸೇವೆಗಳಿಗೆ ಸೇರಿದ ವಿವಿಧ ಕಚೇರಿಗಳಲ್ಲಿ ಅಥವಾ ಪ್ರಥಮ ದರ್ಜೆ ಕಾಲೇಜು ಅಥವಾ ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಗ್ರೂಪ್–ಎ, ಗ್ರೂಪ್–ಬಿ, ಗ್ರೂಪ್–ಸಿ ಅಥವಾ ಗ್ರೂಪ್– ಡಿ ಬೋಧಕೇತರ ಹುದ್ದೆಗಳ ಯಾವುದೇ ಪ್ರವರ್ಗಕ್ಕೆ ಸೇರಿದ ಮತ್ತು ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದ ಅಂಥ ಇತರ ಹುದ್ದೆಗಳಿಗೆ ನೇಮಕವಾದ ಒಬ್ಬ ವ್ಯಕ್ತಿ;

(ಜಿ) "ಪ್ರಾಂಶುಪಾಲ" ಎಂದರೆ, ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಕಾಲೇಜು ಶಿಕ್ಷಣ ಇಲಾಖೆಗೆ ಸೇರಿದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಪ್ರಾಂಶುಪಾಲ ಗ್ರೇಡ್ – I (ಯು.ಜಿ) ಅಥವಾ ಪ್ರಾಂಶುಪಾಲ ಗ್ರೇಡ್ – II (ಪಿ.ಜಿ) ಪ್ರವರ್ಗದ ಹುದ್ದೆಗೆ ನೇಮಕವಾದ ವ್ಯಕ್ತಿ;

(ಎಚ್) "ಕೌನ್ಸಿಲಿಂಗ್ ಪ್ರಕ್ರಿಯೆ" ಎಂದರೆ, ನೇಮಕಾತಿಗಾಗಿ ಪರಿಗಣಿಸಲ್ಪಟ್ಟ ವ್ಯಕ್ತಿಗೆ ಅಥವಾ ವರ್ಗಾವಣೆಗಾಗಿ ಪರಿಗಣಿಸಲ್ಪಟ್ಟ ಒಬ್ಬ ಸರ್ಕಾರಿ ನೌಕರನಿಗೆ, ಆತನು ಕೆಲಸ ಮಾಡುವ ಸ್ಥಳದಲ್ಲಿ ಆತನು ಸಲ್ಲಿಸಿದ ಸೇವಾವಧಿಯ ಆಧಾರದ ಮೇಲೆ ಒಂದು ಸ್ಥಳ ಅಥವಾ ಹುದ್ದೆಯನ್ನು ಆದ್ಯತೆಯ ಮೇಲೆ ಆಯ್ಕೆ ಮಾಡಿಕೊಳ್ಳಲು ಅವಕಾಶಗಳನ್ನು ನೀಡುವ ಮೂಲಕ ಮತ್ತು ನಿಯಮಿಸಬಹುದಾದ ಅಂಥ ಇತರ ಮಾನದಂಡಗಳ ಮೇಲೆ ವರ್ಗಾವಣೆಯನ್ನು ಮಾಡುವ ಗಣಕೀಕೃತ ಕೌನ್ಸಿಲಿಂಗ್ ಪ್ರಕ್ರಿಯೆ;

(ಐ) "ಕಾಲೇಜು ಶಿಕ್ಷಣ ಇಲಾಖೆಯ ಸಿಬ್ಬಂದಿ" ಎಂದರೆ, ಕಾಲೇಜು ಶಿಕ್ಷಣ ಇಲಾಖೆಯ ಪ್ರಾಂಶುಪಾಲ, ಬೋಧಕ ಸಿಬ್ಬಂದಿ ಅಥವಾ ಬೋಧಕೇತರ ಸಿಬ್ಬಂದಿ;

(ಜೆ) "ಅನುಸೂಚಿ" ಎಂದರೆ, ಈ ಅಧಿನಿಯಮಕ್ಕೆ ಲಗತ್ತಿಸಲಾದ ಅನುಸೂಚಿ;

(ಕೆ) "ಬೋಧಕ ಸಿಬ್ಬಂದಿ" ಎಂದರೆ,–

(i) ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದಂತೆ ಕಾಲೇಜು ಶಿಕ್ಷಣ ಇಲಾಖೆಯ ಸೇವೆಗಳಿಗೆ ಸೇರಿದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಪ್ರಾಧ್ಯಾಪಕ/ಸಹ ಪ್ರಾಧ್ಯಾಪಕ/ಸಹಾಯಕ ಪ್ರಾಧ್ಯಾಪಕ ಮತ್ತು ಇತರ ಬೋಧಕ ಹುದ್ದೆಗಳ ಯಾವುದೇ ಪ್ರವರ್ಗಕ್ಕೆ ನೇಮಕವಾದ ವ್ಯಕ್ತಿ;

(ii) ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದಂತೆ ಕಾಲೇಜು ಶಿಕ್ಷಣ ಇಲಾಖೆಯ ಸೇವೆಗಳಿಗೆ ಸೇರಿದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಗ್ರಂಥಪಾಲಕ ಹುದ್ದೆಗಳ ಪ್ರವರ್ಗಕ್ಕೆ ನೇಮಕವಾದ ವ್ಯಕ್ತಿ; ಮತ್ತು

(iii) ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದಂತೆ ಕಾಲೇಜು ಶಿಕ್ಷಣ ಇಲಾಖೆಯ ಸೇವೆಗಳಿಗೆ ಸೇರಿದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ದೈಹಿಕ ಸಂಸ್ಕೃತಿ ಶಿಕ್ಷಕ ಹುದ್ದೆಗಳ ಪ್ರವರ್ಗಕ್ಕೆ ನೇಮಕವಾದ ವ್ಯಕ್ತಿ.

(ಎಲ್) "ವರ್ಗಾವಣೆ" ಎಂದರೆ, ಸಿಬ್ಬಂದಿಯನ್ನು ಒಂದು ಹುದ್ದೆ ಅಥವಾ ಕಚೇರಿಯಿಂದ ಮತ್ತೊಂದು ಹುದ್ದೆ ಅಥವಾ ಕಚೇರಿಗೆ, ಕಾರ್ಯನಿರ್ವಹಿಸುತ್ತಿರುವ ಒಂದು ಸ್ಥಳದಿಂದ ಮತ್ತೊಂದು ಸ್ಥಳದ ಹುದ್ದೆಗೆ ನಿಯೋಜಿಸುವುದು ಮತ್ತು ಇದು ಅದೇ ವಲಯ ಅಥವಾ ವೃಂದದೊಳಗೆ ಅಥವಾ ಹೊರಗಿನ ವರ್ಗಾವಣೆಯನ್ನು ಒಳಗೊಳ್ಳುತ್ತದೆ;

(ಎಂ) "ಜ್ಯೇಷ್ಠತಾ ಘಟಕ" ಎಂದರೆ:–

(i) ಕಾಲೇಜು ಶಿಕ್ಷಣ ಇಲಾಖೆಯ ಪ್ರಾಂಶುಪಾಲ, ಎಲ್ಲಾ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯ (ಗ್ರೂಪ್ –ಡಿ ಹುದ್ದೆಗಳ ಪ್ರವರ್ಗವನ್ನು ಹೊರತುಪಡಿಸಿ) ನಿಯೋಜನೆಯ ಉದ್ದೇಶಕ್ಕಾಗಿ ಜ್ಯೇಷ್ಠತಾ ಘಟಕವು, ರಾಜ್ಯವಾಗಿರತಕ್ಕದ್ದು;

(ii) ಕಾಲೇಜು ಶಿಕ್ಷಣ ಇಲಾಖೆಯ ಹುದ್ದೆಗಳ ಗ್ರೂಪ್ –ಡಿ ಪ್ರವರ್ಗಗಳಿಗಾಗಿ, ಜೇಷ್ಠತಾ ಘಟಕವು, ಜಿಲ್ಲೆ ಆಗಿರತಕ್ಕದ್ದು;

(ಎನ್) "ವಲಯ" ಎಂದರೆ, ಸಿಬ್ಬಂದಿಯ ವರ್ಗಾವಣೆಯ ಉದ್ದೇಶಕ್ಕಾಗಿ ವಲಯವಾಗಿ ವರ್ಗೀಕರಿಸಲಾದ ನಿರ್ದಿಷ್ಟ ಪ್ರದೇಶಗಳು, ಮತ್ತು,

I. "ವಲಯ – ಎ" ಎಂದರೆ,–

(ಎ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (ಬಿಬಿಎಂಪಿ) ಮಿತಿಗಳ ಅಡಿಯಲ್ಲಿ ಬರುವ ಪ್ರದೇಶಗಳು ಮತ್ತು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ (ಬಿಡಿಎ) ಮಿತಿಗಳ ಅಡಿಯಲ್ಲಿ ಬರುವ ಪ್ರದೇಶಗಳು;

(ಬಿ) ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಅಡಿಯಲ್ಲಿ ರಚಿತವಾದ ನಗರ ಪಾಲಿಕೆಗಳ ಮಿತಿಗಳ ಅಡಿಯಲ್ಲಿ ಬರುವ ಪ್ರದೇಶಗಳು; ಮತ್ತು

(ಸಿ) ಎಲ್ಲಾ ಜಿಲ್ಲೆಗಳ ಜಿಲ್ಲಾ ಕೇಂದ್ರ ಸ್ಥಾನಗಳು ಮತ್ತು ನಗರ ಸಭೆ/ಸಿಟಿ ಮುನಿಸಿಪಾಲಿಟಿ ಮಿತಿಗಳ ಅಡಿಯಲ್ಲಿ ಬರುವ ಪ್ರದೇಶಗಳು.

II. "ವಲಯ – ಬಿ" ಎಂದರೆ, ವಲಯ–ಎ ಅಡಿಯಲ್ಲಿ ಬರುವ ಪ್ರದೇಶವನ್ನು ಹೊರತುಪಡಿಸಿ ಎಲ್ಲಾ ಜಿಲ್ಲೆಗಳ, ತಾಲ್ಲೂಕು ಕೇಂದ್ರಸ್ಥಾನಗಳಲ್ಲಿ ಮತ್ತು ಪಟ್ಟಣ ಮುನಿಸಿಪಾಲಿಟಿ ಅಡಿಯಲ್ಲಿ ಬರುವ ಪ್ರದೇಶಗಳು.

III. "ವಲಯ – ಸಿ" ಎಂದರೆ, ವಲಯ–ಎ ಮತ್ತು ವಲಯ–ಬಿ ಹೊರಗೆ ಬರುವ ಪ್ರದೇಶಗಳು.

(2) ಇದರಲ್ಲಿ ಬಳಸಲಾದ ಆದರೆ ಈ ಅಧಿನಿಯಮದಲ್ಲಿ ಪರಿಭಾಷಿಸಿರದ ಇತರ ಪದಗಳು ಮತ್ತು ಪದಾವಳಿಗಳು ಕರ್ನಾಟಕ ರಾಜ್ಯ ನಾಗರಿಕ ಸೇವೆಗಳ ಅಧಿನಿಯಮ, 1978ರಲ್ಲಿ (1990ರ ಕರ್ನಾಟಕ ಅಧಿನಿಯಮ 14) ಅವುಗಳಿಗೆ ಗೊತ್ತುಪಡಿಸಿರುವ ಅದೇ ಅರ್ಥವನ್ನು ಹೊಂದಿರತಕ್ಕದ್ದು.

**3. ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯನ್ನು ವಲಯ–ಸಿ ಗೆ ಕಡ್ಡಾಯವಾಗಿ ನೇಮಕ ಮಾಡುವುದು.–** (1) ಪ್ರತಿಯೊಂದು ನೇಮಕಾತಿ ಪ್ರಾಧಿಕಾರವು. ಕಾಲೇಜು ಶಿಕ್ಷಣ ಇಲಾಖೆಯ ವಿವಿಧ ಕಚೇರಿಗಳಿಗೆ/ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ ಪ್ರಾಂಶುಪಾಲರು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯನ್ನು ಪ್ರಥಮವಾಗಿ ನೇಮಕಾತಿ ಮಾಡುವಾಗ, ಮೊದಲಿಗೆ ವಲಯ–ಸಿ ಯಲ್ಲಿನ ಹುದ್ದೆಗಳು ಭರ್ತಿಯಾಗತಕ್ಕದ್ದೆಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.

(2) ಪ್ರಥಮ ನೇಮಕ ಅಥವಾ ವರ್ಗಾವಣೆಗೆ ಯಾವುದೇ ಖಾಲಿ ಹುದ್ದೆ ಲಭ್ಯವಿಲ್ಲದಿದ್ದಲ್ಲಿ, ಕನಿಷ್ಠ ಸಂಖ್ಯೆಯ ವರ್ಷಗಳ ಸೇವೆಯನ್ನು ಅಥವಾ ಹೆಚ್ಚಿನ ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯನ್ನು ವಲಯ–ಸಿ ಇಂದ ವಲಯ–ಬಿ ಗೆ ಮತ್ತು ವಲಯ–ಬಿ ಇಂದ ವಲಯ–ಎ ಗೆ ಆದ್ಯತೆಯ ಪ್ರಕಾರ ಇನ್ನೊಂದು ವಲಯಕ್ಕೆ ವರ್ಗಾವಣೆ ಮಾಡುವ ಮೂಲಕ ಒಂದು ಖಾಲಿ ಹುದ್ದೆಯನ್ನು ಸೃಜಿಸಬಹುದು:

ಪರಂತು, ಮೇಲಿನ ಷರತ್ತು, ಯಾವುದೇ ವಲಯದಲ್ಲಿ ಯಾವುದೇ ಹುದ್ದೆಯು ಲಭ್ಯವಿಲ್ಲದಿರುವ ವೃಂದಕ್ಕೆ ಅನ್ವಯವಾಗತಕ್ಕದ್ದಲ್ಲ.

(3) (ಎ) ವಲಯ–ಸಿ, ವಲಯ–ಬಿ ಮತ್ತು ವಲಯ–ಎ ಗೆ ವರ್ಗಾವಣೆಗೆ ಅರ್ಹತೆ ಹೊಂದಲು ಪೂರ್ಣಗೊಳಿಸಬೇಕೆಂದು ಅಗತ್ಯಪಡಿಸಲಾದ ಕನಿಷ್ಠ ಸೇವಾವಧಿಯು ನಿಯಮಗಳಲ್ಲಿ ಗೊತ್ತುಪಡಿಸಿರುವಂತೆ ಇರತಕ್ಕದ್ದು.

(ಬಿ) ಕನಿಷ್ಠ ಸೇವಾವಧಿಯನ್ನು ಪೂರ್ಣಗೊಳಿಸಿರುವ ಯಾವೊಬ್ಬ ಪ್ರಾಂಶುಪಾಲರು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿ ಲಭ್ಯವಿರದಿದ್ದರೆ, ಗೊತ್ತುಪಡಿಸಿರುವ ಅವಧಿಗಿಂತ ಕಡಿಮೆ ಇರುವ ಗರಿಷ್ಠ ಸಂಖ್ಯೆಯ ವರ್ಷಗಳ ಅವಧಿಗೆ ಪ್ರಾಂಶುಪಾಲರು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯಾಗಿ ಸೇವೆಯನ್ನು ಪೂರ್ಣಗೊಳಿಸಿರುವ ವ್ಯಕ್ತಿಯನ್ನು ಮೇಲ್ಕಂಡಂತೆ ವರ್ಗಾವಣೆಗಾಗಿ ಪರಿಗಣಿಸಬಹುದು:

ಪರಂತು, ವಲಯ–ಸಿ ಯಲ್ಲಿ ಸೇವೆ ಸಲ್ಲಿಸುತ್ತಿರುವ ಯಾವೊಬ್ಬ ಪ್ರಾಂಶುಪಾಲನು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯು ವಲಯ –ಬಿ ಗೆ ವರ್ಗಾವಣೆಗೊಳ್ಳಲು ಅರ್ಹರಾಗಿರುವ ಸಂದರ್ಭದಲ್ಲಿ ಮತ್ತು ಹಾಗೆಯೇ ವಲಯ–ಬಿ ಯಲ್ಲಿ ಸೇವೆ ಸಲ್ಲಿಸುತ್ತಿರುವ ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯು ವಲಯ–ಎ ಗೆ ವರ್ಗಾವಣೆಗೊಳ್ಳಲು ಅರ್ಹರಾಗಿರುವ ಸಂದರ್ಭದಲ್ಲಿ, ಆದರೆ ಅವರು ವಲಯ–ಸಿ ಅಥವಾ ಸಂದರ್ಭಾನುಸಾರವಾಗಿ, ವಲಯ–ಬಿ ಯಲ್ಲಿ ಸೇವೆಯನ್ನು ಮುಂದುವರಿಸಲು ಇಚ್ಚಿಸಿದರೆ, ತಮ್ಮ ತಮ್ಮ ವಲಯಗಳಲ್ಲಿ ಸೇವೆಯನ್ನು ಮುಂದುವರಿಸಲು ಅವರಿಗೆ ಅವಕಾಶ ನೀಡಬಹುದು.

**ವಿವರಣೆ:** ಆದ್ಯತೆಯ ಕ್ರಮವನ್ನು, ಇತರ ವಿಷಯಗಳ ಜೊತೆಗೆ, ಒಂದು ವಲಯದಲ್ಲಿ ವಿವಿಧ ವೃಂದಗಳಲ್ಲಿ ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯ ಸೇವಾ ವರ್ಷಗಳ ಒಟ್ಟು ಸಂಖ್ಯೆಯ ಆಧಾರದ ಮೇಲೆ ಮತ್ತು ನಿಯಮಿಸಬಹುದಾದಂಥ ಯಾವುದೇ ಇತರ ಮಾನದಂಡದ ಆಧಾರದ ಮೇಲೆ ಲೆಕ್ಕ ಹಾಕತಕ್ಕದ್ದು.

(ಸಿ) ವಲಯ –ಎ ಅಥವಾ ವಲಯ–ಬಿ ಯಲ್ಲಿರುವ ಮತ್ತು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ಅಡಿಯಲ್ಲಿ ವಿಧಿಸಲಾದ ಯಾವುದೇ ಕಾಲಬದ್ಧ ದಂಡನೆಯ ಶಿಕ್ಷೆಯನ್ನು ಅನುಭವಿಸುತ್ತಿರುವ ಅಥವಾ ನ್ಯಾಯಾಲಯದಲ್ಲಿ ಯಾವುದೇ ಕ್ರಿಮಿನಲ್ ಆರೋಪಗಳನ್ನು ಎದುರಿಸುತ್ತಿರುವ ಒಬ್ಬ ಪ್ರಾಂಶುಪಾಲರು, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯನ್ನು ವಲಯ–ಸಿ ಗೆ ವರ್ಗಾವಣೆ ಮಾಡಬಹುದು, ವಲಯ–ಸಿ ಯಲ್ಲಿ ಯಾವುದೇ ಖಾಲಿ ಹುದ್ದೆ ಇಲ್ಲದಿದ್ದರೆ, (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ರೀತಿಯಲ್ಲಿ ಒಂದು ಖಾಲಿ ಹುದ್ದೆಯನ್ನು ಸೃಜಿಸಬಹುದು:

ಪರಂತು, ಅಂಥ ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯು ವಲಯ–ಸಿ ಯಲ್ಲಿ ಕಾರ್ಯನಿರ್ವಹಿಸುತ್ತಿದ್ದರೆ, ಅವನು ಕೆಲಸ ಮಾಡುತ್ತಿರುವ ಒಂದು ಸ್ಥಳದಿಂದ ಅದೇ ವಲಯದಲ್ಲಿನ ಇನ್ನೊಂದು ಸ್ಥಳಕ್ಕೆ ಅವನನ್ನು ವರ್ಗಾವಣೆ ಮಾಡತಕ್ಕದ್ದು, ಆದರೆ ಅಂಥ ಶಿಸ್ತು ವ್ಯವಹರಣೆಗಳು, ಕ್ರಿಮಿನಲ್ ವ್ಯವಹರಣೆ ಅಥವಾ ದಂಡನೆಯು ಪೂರ್ಣಗೊಳ್ಳುವವರೆಗೆ ಅವನನ್ನು ವಲಯ–ಸಿ ಯಿಂದ ಹೊರಗೆ ವರ್ಗಾವಣೆ ಮಾಡತಕ್ಕದ್ದಲ್ಲ.

**4. ಕೌನ್ಸಿಲಿಂಗ್ ಮೂಲಕ ವರ್ಗಾವಣೆ.–** ಈ ಅಧಿನಿಯಮದ ಅಡಿಯಲ್ಲಿ ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯ ವರ್ಗಾವಣೆಯನ್ನು ನಿಯಮಿಸಬಹುದಾದ ಅಂಥ ರೀತಿಯಲ್ಲಿ ನಡೆಸಲಾಗುವ ಕೌನ್ಸಿಲಿಂಗ್ ಪ್ರಕ್ರಿಯೆಯ ಮೂಲಕ ಮಾಡತಕ್ಕದ್ದು:

ಮತ್ತು ಪರಂತು, ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಗ್ರೂಪ್ –ಡಿ ಪ್ರವರ್ಗದಲ್ಲಿ ಕೆಲಸ ಮಾಡುತ್ತಿರುವ ಒಬ್ಬ ವ್ಯಕ್ತಿಯನ್ನು ಜಿಲ್ಲೆಯೊಳಗೆ ವರ್ಗಾವಣೆ ಮಾಡಬಹುದು:

ಪರಂತು, ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಗ್ರೂಪ್ –ಡಿ ಹುದ್ದೆಯಲ್ಲಿ ಕೆಲಸ ಮಾಡುತ್ತಿರುವ ಒಬ್ಬ ವ್ಯಕ್ತಿಯನ್ನು, ಆತನ/ಆಕೆಯ ಕೋರಿಕೆಯ ಮೇಲೆ ಮಾತ್ರವೇ ಒಂದು ಜಿಲ್ಲೆಯಿಂದ ಇನ್ನೊಂದು ಜಿಲ್ಲೆಗೆ ವರ್ಗಾವಣೆ ಮಾಡಬಹುದು.

**5. ಸಾರ್ವಜನಿಕ ಸೇವೆಯ ಹಿತದೃಷ್ಟಿಯಿಂದ ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯ (ಗ್ರೂಪ್–ಡಿ ಹೊರತುಪಡಿಸಿ) ವರ್ಗಾವಣೆ.–** ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಸೇವೆಯಲ್ಲಿರುವ ಮತ್ತು ಕಾಲೇಜು ಶಿಕ್ಷಣ ಇಲಾಖೆಯ ಯಾವುದೇ ಕಚೇರಿಯಲ್ಲಿ ಅಥವಾ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ, ಅದೇ ವಲಯ–ಸಿ ಯಲ್ಲಿ ಅದೇ ಸ್ಥಳದಲ್ಲಿ ನಿಯಮಿಸಲಾದ ವರ್ಷಗಳ ಸಂಖ್ಯೆಗಿಂತ ಹೆಚ್ಚು ಕಾಲ ನಿರಂತರವಾಗಿ ಸೇವೆ ಸಲ್ಲಿಸಿರುವ ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯನ್ನು ಸಾರ್ವಜನಿಕ ಹಿತದೃಷ್ಟಿಯಲ್ಲಿ ಇನ್ನೊಂದು ವಲಯಕ್ಕೆ ವರ್ಗಾವಣೆ ಮಾಡತಕ್ಕದ್ದು:

ಪರಂತು, ವಯೋನಿವೃತ್ತಿಗೆ ಎರಡು ವರ್ಷಗಳಿಗಿಂತ ಕಡಿಮೆ ಸೇವಾವಧಿ ಉಳಿದಿರುವ ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯನ್ನು, ಆತನ ಕೋರಿಕೆಯ ಮೇಲೆ ಹೊರತು ವಲಯ–ಎ ಯಿಂದ ಹೊರಗೆ ವರ್ಗಾವಣೆ ಮಾಡತಕ್ಕದ್ದಲ್ಲ.

**6. ವರ್ಗಾವಣೆಯ ಮೇಲೆ ನಿರ್ಬಂಧ.–** ಜ್ಯೇಷ್ಠತೆಯ ಘಟಕದಲ್ಲಿನ ಅಂಥ ವರ್ಗಾವಣೆಗಳ ಒಟ್ಟು ಸಂಖ್ಯೆಯು ಆ ಜ್ಯೇಷ್ಠತೆಯ ಘಟಕದಲ್ಲಿನ ಆಯಾ ವೃಂದಕ್ಕೆ ಮಂಜೂರಾಗಿರುವ ಸಂಖ್ಯಾ ಬಲದ ಶೇಕಡಾ ಎಂಟರಷ್ಟನ್ನು ಮೀರತಕ್ಕದ್ದಲ್ಲ:

ಪರಂತು, ಮೇಲೆ ಹೇಳಿರುವಂಥ ವರ್ಗಾವಣೆಯ ಒಟ್ಟು ಸಂಖ್ಯೆಯ ಶೇಕಡ ಎಂಟರ ಪೈಕಿ, ವಿಶೇಷ ಪ್ರವರ್ಗದ ಅಡಿಯಲ್ಲಿ ಮಾಡಬೇಕಾದ ವರ್ಗಾವಣೆಗಳ ಶೇಕಡಪ್ರಮಾಣವು ನಿಯಮಿಸಬಹುದಾದಂತೆ ಇರತಕ್ಕದು.

**7. ಹುದ್ದೆಗಳನ್ನು ಸ್ಥಳಾಂತರಗೊಳಿಸುವುದು.–** ಕಾಲೇಜು ಶಿಕ್ಷಣ ಇಲಾಖೆಯ ಯಾವುದೇ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ, ಯಾವುದೇ ವಿಷಯದಲ್ಲಿ, ಬೋಧಕ ಸಿಬ್ಬಂದಿಗೆ ಸಾಕಷ್ಟು ಕಾರ್ಯಭಾರ ಇಲ್ಲದಿದ್ದರೆ, ಸಕ್ಷಮ ಪ್ರಾಧಿಕಾರವು ಹೆಚ್ಚುವರಿಯೆಂದು ನಿರ್ಧರಿಸಬಹುದಾದಷ್ಟು ಸಂಖ್ಯೆಯ ಹುದ್ದೆಗಳನ್ನು ಸಾಕಷ್ಟು ಕಾರ್ಯಭಾರವಿರುವಂಥ ಅದೇ ವಲಯದೊಳಗಿನ ಯಾವುದೇ ಇತರ ಕಾಲೇಜಿಗೆ ಸ್ಥಳಾಂತರಿಸಬಹುದು:

ಪರಂತು, ಅದೇ ವಲಯದಲ್ಲಿ ಆ ವಿಷಯ ಅಥವಾ ವೃಂದದಲ್ಲಿ ಸಾಕಷ್ಟು ಕಾರ್ಯಭಾರ ಇರುವಂಥ ಕಚೇರಿ ಅಥವಾ ಕಾಲೇಜು ಲಭ್ಯವಿಲ್ಲದಿದ್ದರೆ, ಆ ವಿಷಯದ ಅಷ್ಟು ಸಂಖ್ಯೆ ಹುದ್ದೆಗಳನ್ನು ವಲಯ–ಸಿ ಇಂದ ವಲಯ–ಬಿ ಗೆ ಮತ್ತು ವಲಯ–ಬಿ ಇಂದ ವಲಯ–ಎ ಗೆ ಸ್ಥಳಾಂತರಿಸಬಹುದು.

8. ಸ್ಥಳಾಂತರವಾದ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ ಸಿಬ್ಬಂದಿ/ಬೋಧಕೇತರ ಸಿಬ್ಬಂದಿಯ ವರ್ಗಾವಣೆ.– 7ನೇ ಪ್ರಕರಣದ ಅನ್ವಯ ಸ್ಥಳಾಂತರವಾದ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯನ್ನು 3, 4 ಮತ್ತು 5ನೇ ಪ್ರಕರಣದ ಅನ್ವಯ ಅದೇ ವಲಯದಲ್ಲಿ ವರ್ಗಾವಣೆ ಮಾಡತಕ್ಕದ್ದು.

9. ಪದಾವಧಿಗೆ ಅಪವಾದಗಳು.– ವರ್ಗಾವಣೆಯ ಸಂದರ್ಭದಲ್ಲಿ, ಕಾಲಕಾಲಕ್ಕೆ ನಿಯಮಿಸಬಹುದಾದ ಸ್ಥಳ ಅಥವಾ ವಲಯದಲ್ಲಿ ಇರಬೇಕಾದ ಕನಿಷ್ಠ ಅವಧಿಯನ್ನು ಈ ಮುಂದಿನ ಸಂದರ್ಭಗಳಲ್ಲಿ ಸಡಿಲಗೊಳಿಸತಕ್ಕದ್ದು, ಎಂದರೆ:–

(i) ಗಂಡ ಹೆಂಡತಿಯರಿಬ್ಬರೂ ಸರ್ಕಾರಿ ನೌಕರರಾಗಿದ್ದು ಅವರಿಬ್ಬರಲ್ಲಿ ಒಬ್ಬರು ಬೇರೆ ವಲಯದಲ್ಲಿ ಕರ್ತವ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಅವರಲ್ಲಿ ಇನ್ನೊಬ್ಬರನ್ನು ಅದೇ ಸ್ಥಳಕ್ಕೆ ಅಥವಾ ಆತನು ಅದೇ ವಲಯಲ್ಲಿದ್ದರೆ, ಸ್ಪಷ್ಟ ಖಾಲಿ ಸ್ಥಾನದ ಲಭ್ಯತೆಗೊಳಪಟ್ಟು ಹತ್ತಿರದ ಸ್ಥಳಕ್ಕೆ ವರ್ಗಾಯಿಸಬಹುದು;

(ii) ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯು ವಿಧವೆಯಾಗಿದ್ದಲ್ಲಿ;

(iii) ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯು ದೈಹಿಕವಾಗಿ ಅಸಮರ್ಥರಾಗಿದ್ದಲ್ಲಿ;

(iv) ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಗೆ ಪತಿ/ಪತ್ನಿ ಅಥವಾ ಮಕ್ಕಳು ಇದ್ದು, ಕೆಲಸ ಮಾಡುತ್ತಿರುವ ಸ್ಥಳದಲ್ಲಿ ವೈದ್ಯಕೀಯ ಚಿಕಿತ್ಸೆಯು ಲಭ್ಯವಿಲ್ಲದ ತೀವ್ರ ಸ್ವರೂಪದ ಕಾಯಿಲೆಯಿಂದ ಬಳಲುತ್ತಿದ್ದರೆ, ಆ ಕಾಯಿಲೆಗೆ ಅಗತ್ಯವಾದ ವೈದ್ಯಕೀಯ ಚಿಕಿತ್ಸೆ ಕೊಡಿಸಲು ಸಾಧ್ಯವಾಗುವ ಹಾಗೆ, ಅಂಥ ಚಿಕಿತ್ಸೆ ಲಭ್ಯವಿರುವಂಥ ಒಂದು ಸ್ಥಳಕ್ಕೆ ಆತನನ್ನು ವರ್ಗಾವಣೆ ಮಾಡುವುದು ಅಗತ್ಯವಾಗಿದ್ದರೆ, ಸಂಬಂಧಪಟ್ಟ ಪ್ರಾಂಶುಪಾಲ, ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯು, ಕಾಯಿಲೆಯ ಸ್ವರೂಪವನ್ನು ನಿರ್ದಿಷ್ಟಪಡಿಸಿ, ಆತನು ಕಾರ್ಯ ನಿರ್ವಹಿಸುತ್ತಿರುವ ಸ್ಥಳದಲ್ಲಿ ಅಗತ್ಯ ಚಿಕಿತ್ಸೆಯು ಲಭ್ಯವಿಲ್ಲವೆಂಬ ಸಂಗತಿಯನ್ನು ತಿಳಿಸಿ, ಅಗತ್ಯ ಚಿಕಿತ್ಸೆಯು ಯಾವ ಸ್ಥಳದಲ್ಲಿ ದೊರೆಯುತ್ತದೆ ಎಂಬುದನ್ನು ನಿರ್ದಿಷ್ಟಪಡಿಸಿ ಮತ್ತು ಅಗತ್ಯವಿರುವ ವೈದ್ಯಕೀಯ ಚಿಕಿತ್ಸೆ ಕೊಡಿಸಲು ಅಂಥ ಒಂದು ಸ್ಥಳಕ್ಕೆ ಆತನನ್ನು ವರ್ಗಾವಣೆ ಮಾಡುವುದು ಅವಶ್ಯವೆಂದು ಪ್ರಮಾಣೀಕರಿಸಿ ಜಿಲ್ಲಾ ವೈದ್ಯಕೀಯ ಮಂಡಳಿಯು ನೀಡಿರುವ ಒಂದು ಪ್ರಮಾಣಪತ್ರವನ್ನು ಹಾಜರು ಪಡಿಸಿದ ಹೊರತು, ಯಾವುದೇ ವರ್ಗಾವಣೆಯನ್ನು ಪರಿಗಣಿಸತಕ್ಕದ್ದಲ್ಲ.

10. ನಿಯೋಜನೆಯ ನಿಯಂತ್ರಣ.– ಕಾಲೇಜು ಶಿಕ್ಷಣ ಇಲಾಖೆಯ ಒಂದು ಕಚೇರಿ ಅಥವಾ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಿಂದ ಕಾಲೇಜು ಶಿಕ್ಷಣ ಇಲಾಖೆಯ ಮತ್ತೊಂದು ಕಚೇರಿ ಅಥವಾ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ನಿಯೋಜನೆಯು ಸಂಪೂರ್ಣವಾಗಿ ಅವಶ್ಯವಾಗುವ ಅನಿವಾರ್ಯ ಸನ್ನಿವೇಶಗಳಿದ್ದಲ್ಲಿ, ಆಗ ಬೋಧಕ ಅಥವಾ ಬೋಧಕೇತರ ಸಿಬ್ಬಂದಿಯ ಅಂಥ ನಿಯೋಜನೆಯನ್ನು ಅದೇ ವಲಯದೊಳಗೆ ಮಾಡತಕ್ಕದ್ದು.

**11. ದಂಡಗಳು.–** ಈ ಅಧಿನಿಯಮ ಅಥವಾ ಅದರ ಅಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳನ್ನು ಉಲ್ಲಂಘಿಸಿ ಯಾವುದೇ ಸಕ್ಷಮ ಪ್ರಾಧಿಕಾರ ಅಥವಾ ಯಾವೊಬ್ಬ ಅಧಿಕಾರಿಯು ಸ್ಥಳ ನಿಯುಕ್ತಿ ಅಥವಾ ನೇಮಕಾತಿ ಅಥವಾ ವರ್ಗಾವಣೆಯ ಆದೇಶವನ್ನು ಮಾಡಿದ್ದರೆ ಅಂಥ ಸಕ್ಷಮ ಪ್ರಾಧಿಕಾರ ಅಥವಾ ಅಧಿಕಾರಿ ಸಂದರ್ಭಾನುಸಾರವಾಗಿ ಪ್ರಾಧಿಕಾರಿಯ ಸಿವಿಲ್ ಸೇವಕರಿಗೆ ಅನ್ವಯಿಸುವಂಥ ಶಿಸ್ತು ನಿಯಮಾವಳಿ ಅಡಿಯಲ್ಲಿ ಶಿಸ್ತಿನ ಕ್ರಮಕ್ಕೆ ಗುರಿಯಾಗತಕ್ಕದ್ದು.

**12. ಅಪರಾಧಗಳ ಸಂಜ್ಞೇಯತೆ.–** ಯಾವ ನ್ಯಾಯಾಲಯವೂ, ಸರ್ಕಾರಿ ರಾಜ್ಯಪತ್ರದಲ್ಲಿ ಈ ಬಗ್ಗೆ ಪ್ರಕಟಿಸಲಾದ ಅಧಿಸೂಚನೆಯ ಮೂಲಕ ಸರ್ಕಾರದಿಂದ ಅಧಿಕಾರಪಡೆದ ಒಬ್ಬ ಅಧಿಕಾರಿಯು ಲಿಖಿತ ದೂರಿನ ಮೇಲಲ್ಲದೆ ಈ ಅಧಿನಿಯಮದ ಅಡಿಯಲ್ಲಿನ ಯಾವುದೇ ಅಪರಾಧವನ್ನು ಸಂಜ್ಞಾನಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ.

**13. ಇತರ ಕಾನೂನುಗಳ ಮೇಲೆ ಅಧಿನಿಯಮದ ಅಧ್ಯಾರೋಹಿ ಪರಿಣಾಮ.–** ಈ ಅಧಿನಿಯಮದ ಉಪಬಂಧಗಳು, ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಅವುಗಳಿಗೆ ಅಸಂಗತವಾಗಿ ಏನೇ ಇದ್ದರೂ ಪರಿಣಾಮಕಾರಿಯಾಗಿರತಕ್ಕದ್ದು.

**14. ತೊಂದರೆಗಳನ್ನು ನಿವಾರಿಸಲು ಅಧಿಕಾರ.–** ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಯಾವುದೇ ತೊಂದರೆ ಉದ್ಭವಿಸಿದಲ್ಲಿ, ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ, ತೊಂದರೆಗಳನ್ನು ನಿವಾರಿಸಲು ತನಗೆ ಅವಶ್ಯಕ ಅಥವಾ ಯುಕ್ತವೆಂದು ಕಂಡುಬರುವ ಮತ್ತು ಈ ಅಧಿನಿಯಮದ ಉದ್ದೇಶಗಳಿಗೆ ಅಸಂಗತವಾಗಿರದಂಥ ಉಪಬಂಧಗಳನ್ನು ರಚಿಸಬಹುದು.

**15. ಅನುಸೂಚಿಯನ್ನು ತಿದ್ದುಪಡಿ ಮಾಡಲು ಅಧಿಕಾರ.–** ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ನಮೂದನ್ನು ಸೇರಿಸಬಹುದು, ಮಾರ್ಪಡಿಸಬಹುದು ಅಥವಾ ತೆಗೆದುಹಾಕಬಹುದು.

**16. ಸದ್ಭಾವನೆಯಲ್ಲಿ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧಿನಿಯಮದ ಅಡಿಯಲ್ಲಿ ಸದ್ಭಾವನೆಯಿಂದ ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಲಾದ ಯಾವುದೇ ಕ್ರಮದ ಬಗ್ಗೆ ಸರ್ಕಾರದ ಯಾವೊಬ್ಬ ಅಧಿಕಾರಿಯ ವಿರುದ್ಧ ಯಾವುದೇ ದಾವೆ, ಅಭಿಯೋಜನೆ ಅಥವಾ ಇತರ ಕಾನೂನು ವ್ಯವಹರಣೆಯನ್ನು ಕೈಗೊಳ್ಳಲು ಅವಕಾಶವಿರತಕ್ಕದ್ದಲ್ಲ.

**17. ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ, ಅಧಿಸೂಚನೆಯ ಮೂಲಕ ಮತ್ತು ಪೂರ್ವಪ್ರಕಟಣೆ ನೀಡಿದ ತರುವಾಯ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಯಾವುದೇ ನಿಯಮವನ್ನು ಪೂರ್ವಾನ್ವಯವಾಗಿ ರಚಿಸಬಹುದು ಮತ್ತು ಅಂಥ ನಿಯಮವನ್ನು ರಚಿಸಿದ ತರುವಾಯ ನಿಯಮವನ್ನು ರಚಿಸಿದ ಕಾರಣಗಳನ್ನು ನಿರ್ದಿಷ್ಟವಾಗಿ ತಿಳಿಸುವ ಹೇಳಿಕೆಯೊಂದನ್ನು ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು ಮತ್ತು (3)ನೇ ಉಪ ಪ್ರಕರಣದ ಅಡಿಯಲ್ಲಿ ಮಾಡಿದ ಯಾವುದೇ ಮಾರ್ಪಾಟಿಗೊಳಪಟ್ಟು, ಈ ಅಧಿನಿಯಮದ ಅಡಿಯಲ್ಲಿ ಮಾಡಿದ ಪ್ರತಿಯೊಂದು ನಿಯಮವು, ಈ ಅಧಿನಿಯಮದ ಅಡಿಯಲ್ಲಿ ಅದು ಅಧಿನಿಯಮಿತವಾಗಿದ್ದರೆ ಹೇಗೋ ಹಾಗೆ ಪರಿಣಾಮಕಾರಿಯಾಗಿರತಕ್ಕದ್ದು.

(3) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು ಅಥವಾ ಹೊರಡಿಸಿದ ಅಧಿಸೂಚನೆಯನ್ನು, ಅದನ್ನು ರಚಿಸಿದ ತರುವಾಯ ಸಾಧ್ಯವಾದಷ್ಟು ಬೇಗನೇ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳವರೆಗೆ ಅದು ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ನಿಕಟೋತ್ತರ ಅಧಿವೇಶನಗಳು ಮುಕ್ತಾಯವಾಗುವ ಮೊದಲು, ವಿಧಾನಮಂಡಲದ ಉಭಯ ಸದನಗಳು ನಿಯಮದಲ್ಲಿ ಅಥವಾ ಅಧಿಸೂಚನೆಯಲ್ಲಿ ಯಾವುದೇ ಮಾರ್ಪಾಟುಮಾಡಬೇಕೆಂದು ಒಪ್ಪಿದರೆ ಅಥವಾ ನಿಯಮವನ್ನು ಅಥವಾ ಅಧಿಸೂಚನೆಯನ್ನು ರಚಿಸಬಾರದೆಂದು ತೀರ್ಮಾನಿಸಿದರೆ, ಆ ತರುವಾಯ ಅಂಥ ನಿಯಮವು ಅಥವಾ ಅಧಿಸೂಚನೆಯು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗಿರತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಅಂಥ ಮಾರ್ಪಾಟು ಅಥವಾ ರದ್ದತಿಯು ಆ ನಿಯಮದ ಅಥವಾ ಅಧಿಸೂಚನೆಯ ಅಡಿಯಲ್ಲಿ ಈ ಹಿಂದೆ ಮಾಡಿದ ಯಾವುದೇ ಕಾರ್ಯಕ್ಕೂ ಬಾಧಕವಾಗತಕ್ಕದ್ದಲ್ಲ.

**18. ತಾತ್ಕಾಲಿಕ ಉಪಬಂಧಗಳು.–** ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಜಾರಿಯಲ್ಲಿರುವ ಹಾಗೂ ಯಾವ ವಿಷಯಗಳ ಮುಂದುವರಿಕೆಗಾಗಿ ಈ ಅಧಿನಿಯಮವನ್ನು ಜಾರಿಗೆ ತರಲಾಗಿದೆಯೋ ಅಥವಾ ಉಪಬಂಧ ಕಲ್ಪಿಸಲಾಗಿದೆಯೋ ಅದಕ್ಕೆ ಸಂಬಂಧಪಟ್ಟ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 ರ (1990ರ ಕರ್ನಾಟಕ ಅಧಿನಿಯಮ 14) ಅಡಿಯಲ್ಲಿ ಈ ಅಧಿನಿಯಮದ ಪ್ರಾರಂಭಕ್ಕೆ ಮೊದಲು ರಚಿಸಿದ ಅಥವಾ ಹೊರಡಿಸಿದ ಯಾವುದೇ ನಿಯಮ, ಅಧಿಸೂಚನೆ, ಆದೇಶ ಅಥವಾ ನೇಮಕಗಳು ಅವು ಈ ಅಧಿನಿಯಮದ ಅಡಿಯಲ್ಲಿ ಮಾಡಿದ ಯಾವುದೇ ಕಾರ್ಯದಿಂದ ಅಥವಾ ತೆಗೆದುಕೊಂಡ ಯಾವುದೇ ಕ್ರಮದಿಂದ ಅಥವಾ ಯಾವುದೇ ನಿಯಮ, ಅಧಿಸೂಚನೆ, ಆದೇಶ ಅಥವಾ ನೇಮಕದಿಂದ ರದ್ದಾದ ಹೊರತು ಮತ್ತು ರದ್ದಾಗುವವರೆಗೆ, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದಿರುವಷ್ಟರ ಮಟ್ಟಿಗೆ, ಅವುಗಳನ್ನು ಈ ಅಧಿನಿಯಮದ ಸಂವಾದಿ ಉಪಬಂಧಗಳ ಅಡಿಯಲ್ಲಿ ರಚಿಸಿದ್ದರೆ ಅಥವಾ ಹೊರಡಿಸಿದ್ದರೆ ಅಥವಾ ನೇಮಿಸಿದ್ದರೆ, ಹೇಗೋ ಹಾಗೆ ಜಾರಿಯಲ್ಲಿ ಮುಂದುವರಿಯತಕ್ಕದ್ದು ಮತ್ತು ಪರಿಣಾಮಕಾರಿಯಾಗಿರತಕ್ಕದ್ದು.

**ಅನುಸೂಚಿ – *I***

(2(ಎಫ್), (ಜಿ) ಮತ್ತು (ಜೆ) ಪ್ರಕರಣವನ್ನು ಮತ್ತು 12ನೇ ಪ್ರಕರಣವನ್ನು ನೋಡಿ)

| *ಕ್ರಮ ಸಂಖ್ಯೆ* | **ಕಾಲೇಜು ಶಿಕ್ಷಣ ಇಲಾಖೆಯ ಹುದೆಗಳ ಪದನಾಮ** |
|---|---|
| **(1)** | **(2)** |
| 1. | ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳು–ಪ್ರಾಂಶುಪಾಲ ಗ್ರೇಡ್–I (ಪಿಜಿ) |
| 2. | ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳು–ಪ್ರಾಂಶುಪಾಲ ಗ್ರೇಡ್–I (ಯುಜಿ) |
| 3. | i. ಅಧ್ಯಾಪಕರು/ಸಹ ಪ್ರಾಧ್ಯಾಪಕರು<br>ii. ಅಧ್ಯಾಪಕರು/ಸಹ ಪ್ರಾಧ್ಯಾಪಕರು<br>iii. ಗ್ರಂಥಪಾಲಕರು<br>iv. ಗ್ರಂಥಪಾಲಕರು ಹಿರಿಯ ಶ್ರೇಣಿ<br>v. ಗ್ರಂಥಪಾಲಕರು ಆಯ್ಕೆ ಗ್ರೇಡ್<br>vi. ದೈಹಿಕ ಸಾಂಸ್ಕೃತಿಕ ಶಿಕ್ಷಕರು<br>vii. ಹಿರಿಯ ಶ್ರೇಣಿ ದೈಹಿಕ ಸಾಂಸ್ಕೃತಿಕ ಶಿಕ್ಷಕರು<br>viii. ಆಯ್ಕೆ ಗ್ರೇಡ್ ದೈಹಿಕ ಸಾಂಸ್ಕೃತಿಕ ಶಿಕ್ಷಕರು |

| ಕ್ರಮ ಸಂಖ್ಯೆ | ಕಾಲೇಜು ಶಿಕ್ಷಣ ಇಲಾಖೆಯ ಹುದೆಗಳ ಪದನಾಮ |
|---|---|
| 4. | ಸಹಾಯಕ ನಿರ್ದೇಶಕರು |
| 5. | ಮ್ಯಾನೇಜರ್ |
| 6. | ಅಧೀಕ್ಷಕ/ವಾರ್ಡನ್ |
| 7. | ಪ್ರಥಮ ದರ್ಜೆ ಸಹಾಯಕರು |
| 8. | ದ್ವಿತೀಯ ದರ್ಜೆ ಸಹಾಯಕರು |
| 9. | ಶೀಘ್ರಲಿಪಿಗಾರರು |
| 10. | ಹಿರಿಯ ಬೆರಳಚ್ಚುಗಾರರು |
| 11. | ಬೆರಳಚ್ಚುಗಾರರು |
| 12. | ಗ್ರಂಥಾಲಯ ಸಹಾಯಕರು |
| 13. | ಹಿರಿಯ ವಾಹನ ಚಾಲಕರು |
| 14. | ವಾಹನ ಚಾಲಕರು |
| 15. | ಅಟೆಂಡರ್ |
| 16. | ಪ್ಯೂನ್‌ಗಳು/ಸಮಾನ ವೃಂದಗಳು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ.ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.


# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜನವರಿ ೧೫, ೨೦೧೩ (ಪುಷ್ಯ ೨೫, ಶಕ ವರ್ಷ ೧೯೩೪) | ನಂ. ೪೭ |
|---|---|---|
| **Part – IV-A** | ***Bangalore, Tuesday, January 15, 2013 (Pushya 25, Shaka Varsha 1934)*** | ***No. 47*** |


## *URBAN DEVELOPMENT SECRETARIAT*

### *NOTIFICATION*

### *No. UDD 207 BMR 2010, Bangalore, Dated: 11th January, 2013*

The draft of the following Regulations further to amend the Zonal Regulations of Interim Master Plan for Magadi Local Planning Area, 2021, which the Government of Karnataka proposes to make in exercise of the powers conferred by section 13-E of the Karnataka Town and Country Planning Act, 1961 (Karnataka Act 11 of 1963) is hereby published as required by the said section, for the information of all persons likely to be affected thereby and notice is hereby given that the said draft will be taken into consideration after thirty days from the date of its publication in the official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Urban Development Department, Vikasa Soudha, Bangalore - 560001.

### *DRAFT REGULATIONS*

***1. Title and Commencement:-*** (1) These regulations may be called the Zonal Regulations of Interim Master Plan for Magadi Local Planning Area (Amendment) Regulations, 2012.

(2) They shall come into force from the date of their publication in the official Gazette.

***2. Amendment of regulation 3:-*** In the Zonal Regulations of Interim Master Plan for Magadi Local Planning Area-2021 under the heading IV sub division regulations in regulation 3 "Approval of residential layouts", in Clause (b), after sub-Clause (i), the following shall be inserted at the end, namely:-

"Provided that, if the proposal is for formation of a layout for distribution of sites by local Bodies, Authorities and Government Institutions under any scheme of Government, then the Authority may accord permission for such proposals where the extent of land is less than 4.0 ha, subject to satisfying the other condition of Zonal regulations".

By Order and in the name of the Governor of Karnataka,

***S.CHANDRAPPA***
Under Secretary to Government
Urban Development Department


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – ***IV-A*** | ಬೆಂಗಳೂರು, ಬುಧವಾರ, ಜನವರಿ ೧೬, ೨೦೧೩ (ಪುಷ್ಯ ೨೬, ಶಕ ವರ್ಷ ೧೯೩೪) | ನಂ. ೪೮ |
| ***Part – IV-A*** | ***Bangalore, Wednesday, January 16, 2013 (Pushya 26, Shaka Varsha 1934*** | ***No. 48*** |


## *WOMEN AND CHILD DEVELOPMENT AND EMPOWERMENT OF DIFFERENTLY ABLED AND SENIOR CITIZENS SECRETARIAT*

### *NOTIFICATION*

### *No.WCD 150 SJD 2007 Bangalore, dated :16th January 2013*

The draft of the Karnataka Department of Women and Child Development (Cadre & Recruitment) Rules, 2013, which the Government of Karnataka proposes to make in exercise of the power conferred by sub-section(1) of section 3 read with section 8 of the Karnataka State Civil Services Act, 1978 (Karnataka Act 14 of 1990) are hereby published as required by clause (a) of sub-section (2) of section 3 of the Act, for the information of the persons likely to be affected thereby and notice is hereby given that the said draft will be taken into consideration after 15 days from the date of its publication in the official gazette.

Any objection or suggestion which may be received by the State Government from any person with respect to the said draft before the expiry of the period specified above, will be considered by the State Government, Objections and suggestions may be addressed to "The Principal, Secretary to Government, Department of Women and Child Development and Empowerment of Differently Abled and Senior Citizens, M.S.Building, Bangalore-560001".

### *DRAFT RULES*

***1. TITLE AND COMMENCEMENT:*** (1) These Rules may be called the Karnataka Department of Women and Child Development ( Cadre & Recruitment) Rules 2013

2) They shall come into force on the date of its publication in the Official Gazette.

***2. METHOD OF RECRUITMENT AND MINIMUM QUALIFICATION, ETC. :-*** The establishment of State Service Cadre in respect of the Karnataka Department of Women and Child Development shall consist of such category of posts with scales of pay specified in column (3) of the schedule and the number and nature of posts, the method of recruitment and the minimum qualification, if any shall be as specified in the corresponding entries in Columns (4) and (5) thereof.

***3. REPEAL AND SAVINGS :***

The Karnataka Women and Child Development Department (Cadre & Recruitment) Rules, 1991 is hereby repealed.

Provided that such repeal shall not affect:-

(a) The previous operation of the said rules or any duly done or any action taken there under; or

(b) any right, privilege, obligation or liability acquired, accrued or incurred under the said rules.

**SCHEDULE**

| Sl. No. | CATEGORY OF POSTS & PAY SCALE | NO. OF POST | | | | METHOD OF RECRUITMENT | MINIMUM QUALIFICATION |
|---|---|---|---|---|---|---|---|
| | | P | T | D | TO TAL | | |
| (1) | (2) | (3) | | | | (4) | (5) |
| 1 | Director of Women & Child Development. Encadred in IAS Scale. | 1 | 0 | 0 | 1 | Encadred to Indian Administrative Service (Senior Scale) | - |
| 2 | Joint Director (Administration) ***40050-56550*** | 1 | 0 | 0 | 1 | By deputation of an officer from Group 'A' from Karnataka Administrative Service Senior Scale | - |
| 3 | Joint Director (including Planning. Developing Monitoring / Integrated Child Development services / Project Director-Streeshakti, Secretary Balbhavan / General manager, Karnataka Women Development Corporation / Joint Director Dept for Empowerment of differently abled and senior citizens, Project Officer, Bala Vikasa Academy, Dharwad) ***40050-56550*** | 0 | 3 | 4 | 7 | By Promotion from the cadre of Deputy Directors including Deputy Project Director (Streeshakti) / District child protection Officer, Bangalore Urban District. | ***<u>Promotion:-</u>*** Must have put in a service of not less than three years in the cadre specified in Col. 04 |
| 4 | Deputy Directors including Deputy Project Director (Streeshakthi) / District child protection Officer Bangalore Urban District. ***36300-53850*** | 2 | 35 | 1 | 38 | By Promotion from the cadre of Senior Assistant Directors including Programme officers, Women and Child Development Officers, Project Officers (Administration) / (Training) in Streeshakthi. / District child protection Officer. | ***<u>Promotion:-</u>*** Must have put in a service of not less than five years in the cadre specified in Col 4. |
| 5 | Senior Assistant Directors including Programme Officers, Women and Child Development Officers, Project Officers (Administration) / (Training) in Streeshakthi / District child protection Officer ***32800-52500*** | 12 | 61 | 29 | 102 | By Promotion from the cadre of Child Development Project Officers. | ***<u>Promotion:-</u>*** Must have put in a service of not less than five years in the cadre of Child Development Project Officer. |
| 6 | Assistant Director (Administration) ***28100-50100*** | 1 | 0 | 0 | 1 | By deputation of an Officer in the grade of Under Secretary from Karnataka Secretariat Service. | - |

| Sl. No. | CATEGORY OF POSTS & PAY SCALE | NO. OF POST | | | | METHOD OF RECRUITMENT | MINIMUM QUALIFICATION |
|---|---|---|---|---|---|---|---|
| | | P | T | D | TO TAL | | |
| (1) | (2) | (3) | | | | (4) | (5) |
| 7 | Accounts Officer **28100-50100** | 0 | 1 | 0 | 1 | By deputation of an Officer in the cadre of – Assistant Controller from the State Accounts Department. ***OR*** Accounts Officer from Accountant General Office. | - |
| 8 | Child Development Project Officers **28100-50100** | 0 | 203 | 0 | 203 | Thirty Percent by Direct Recruitment in accordance with Karnataka Civil Services (Direct recruitment by selection((General) Rules 2006 ***&*** Seventy Percent by Promotion from the cadre of Superintendent Grade-I including Superintendents of Children Home for Boys, Girls, Shishumandira. / Superintendents of State Home for Women/ Office Manager / Research Officer / Assistant Project Officer (Streeshakthi) at Head Office / Manager, State Level Warehouse. /Assistant Child Development Project Officers / Protection officer on the basis of combined seniority. Seniority being determined on the basis of length of service in the respective cadre. | ***For Direct Recruitment:-*** Must be holder of –Master of Social Work. ***OR*** Master of Home Science, (Family Resource Management) ***OR*** Master of Home Science, (Food nutrition) ***OR*** Master of Home Science,.(Human Development & family relations) ***OR*** Master of Home Science, (Child Development) ***OR*** Master of Science in Home Science. ***OR*** Master of Arts in Women studies. ***OR*** Master of Arts in Sociology. from recognized University. ***For Promotion:-*** Must have put in a service of not less than 5 years in cadre specified in Col 4. |
| 9 | Lady Medical Officer/ **28100-50100** | 0 | 2 | 0 | 2 | By deputation from the cadre of Medical Officers from the Department of Health & Family Welfare Services. | - |

| Sl. No. | CATEGORY OF POSTS & PAY SCALE | NO. OF POST | | | | METHOD OF RECRUITMENT | MINIMUM QUALIFICATION |
|---|---|---|---|---|---|---|---|
| | | P | T | D | TO TAL | | |
| (1) | (2) | (3) | | | | (4) | (5) |
| 10 | Superintendent Grade-1 including-<br><br>Superintendents of Children Home for Boys, Girls, Shishumandira/ Superintendents of State Home for Women/ Office Manager/ Research Officer/ Assistant Project Officer (Streeshakthi) at Head Office/ Manager, State Level Warehouse/ Assistant Child Development Project Officers, Protection Officers<br><br>***22800-43200*** | 29 | 294 | 0 | 323 | Forty percent by Direct Recruitment including 05% for in-service employees of Women and Child Development in any cadre. If no suitable in-service employees are available, the same will be filled by Direct Recruitment in accordance with Karnataka Civil Service (Direct Recruitment by selection) (General) Rules-2006.<br><br>&<br><br>Sixty Percent by Promotion from the cadre Superintendent Grade-2 including Office Superintendent in Head Office, District Office, Children Homes/ Probation Officer of Probation of Offender's Act, Observation Homes, Reception centers / Social Case Workers of Children Homes, State Homes, Observation Homes / Special Nutrition Programme Inspector /Theatre Manager of Balbhavan / Senior Supervisors.<br>&<br>Head Masters / Graduate Assistant in the ratio of 29:1 respectively. | ***For Direct Recruitment:-***<br>Must be holder of Master of Social Work<br>***OR***<br>Master of Home Science, (Family Resource Management)/ (Food nutrition)/ (Human Development & family relations)/ (Child Development)<br>***OR***<br>Master of Science in Home Science.<br>***OR***<br>Master of Arts in Women studies.<br>***OR***<br>Master of Arts in Sociology.<br>***OR***<br>LLB<br>from recognized University.<br>***For Direct Recruitment from in service:-***The minimum qualification shall be as specified for direct recruitment.<br>***For Promotion :-***<br>Must have put in a service of not less than five years in the cadre specified in Column No. 4. |
| 11 | Accounts Superintendent/ Audit Superintendent<br>***21600-40050*** | 1 | 4 | 0 | 5 | By Deputation of an official from the State Accounts Department in the cadre of Accounts Superintendent. | - |
| 12 | Superintendent Grade-2 including-<br><br>Office Superintendent in Head Office , District Office, Children Homes /<br>Probation Officer of Probation of Offender's Act, Observation Homes, Reception centers/ | 81 | 585 | 0 | 666 | Thirty percent by Promotion from the cadre of First Division Assistants & Stenographers in the ratio of 29:1 If no suitable person is available for promotion in the cadre of Stenographers, by promotion from the cadre of First Division Assistants.<br><br>and | ***For Promotion:-***<br>Must have put in service of not less than Five years in the cadre of FDAs / Stenographers/ female supervisors.<br><br>In case of Stenographers they must have worked for not less than one year in the cadre of First Division Assistants. |

| Sl. No. | CATEGORY OF POSTS & PAY SCALE | NO. OF POST | | | | METHOD OF RECRUITMENT | MINIMUM QUALIFICATION |
|---|---|---|---|---|---|---|---|
| | | P | T | D | TO TAL | | |
| (1) | (2) | (3) | | | | (4) | (5) |
| | Social Case Workers of Children Homes , State Homes, Observation Homes./ Special Nutrition Programme Inspector.<br>Theatre Manager of Balbhavan/ Senior Supervisors.<br>***20000-36300*** | | | | | Seventy percent by promotion from the cadre of female supervisors. | |
| 13 | Head Master / Graduate Assistants.<br>***17650-32000*** | 17 | 8 | 0 | 25 | By promotion from the cadre of Teachers. | ***<u>For Promotion :-</u>***<br>Must have put in a service not less than Five years as teacher with B.Ed. Qualification from recognized University. |
| 14 | Chief Instructors.<br>***17650-32000*** | 0 | 2 | 0 | 2 | - | - |
| 15 | Staff Nurse.<br>***20000-36300*** | 19 | 0 | 0 | 19 | By deputation of an official in the cadre of Staff Nurse, from the Department of Health and Family Welfare Services | - |
| 16 | First Division Assistants including-<br>Accountants / Deputy Superintendent of Children Homes/ Statistical Assistants/<br>First Division Assistants (Statistics)<br>***14550-26700*** | 62 | 711 | 0 | 773 | Twenty-five percent by Direct Recruitment in accordance with Karnataka Civil Services (Recruitment to Ministerial Posts) Rules 1978.<br>and<br>Seventy-five by Promotion from the cadre of Second Division Assistants /House Fathers / House Mother / Matrons on the basis of combined seniority. Seniority being determined on the length of Service.<br>Provided that a stenographer may be posted to work as First Division Assistant for a period of not less than one year on the basis of seniority. | ***<u>For Promotion:-</u>***<br>Must have put in a service of not less than five years in the cadre of Second Division Assistants/ House Father/ House Mother/ Matrons . |
| 17 | Physiotherapist<br>***14550-26700*** | 0 | 1 | 0 | 1 | By deputation of an official in the cadre of Physiotherapist from the Department of Health and Family Welfare Services. | - |

| Sl. No. | CATEGORY OF POSTS & PAY SCALE | NO. OF POST | | | | METHOD OF RECRUITMENT | MINIMUM QUALIFICATION |
|---|---|---|---|---|---|---|---|
| | | P | T | D | TO TAL | | |
| (1) | (2) | (3) | | | | (4) | (5) |
| 18 | Stenographers<br>***14550-26700*** | 5 | 12 | 0 | 17 | Forty percent by direct recruitment in accordance with the Karnataka Civil Services (Recruitment to the posts of Stenographers and Typists) Rules 1983, and<br>&<br>Sixty percent by promotion from the cadre of Typists, if no suitable candidates are eligible in the cadre of typists for promotion, by promotion from the cadre of Second Division Assistant. | ***<u>For Promotion :-</u>***<br>1.Must have put in a service of not less than Five years in the cadre of Typists and Second Division Assistants.<br>2.Must have passed Senior Kannada Typing & Senior Kannada Short hand. |
| 19 | Female Supervisors<br>***14550-26700*** | 75 | 1920 | 0 | 1995 | By Direct Recruitment in accordance with Karnataka Civil Service (Direct recruitment by selection) (General) Rules-2006 out of which,<br>(a) Fifty-five percent by Direct Recruitment possessing a Bachelors Degree in Home Science, BSW, BA Home science, BA Sociology including five percent for the in-service employees of Women & Child Development Department.<br>and<br>(b) Twenty percent by Direct Recruitment of Anganawadi workers / Female instructors / Principals of AWTCs possessing degree in any subject with 7 years of continuous working experience as Anganawadi Worker/ Female instructors/ Principals of AWTCs or Both<br>and<br>(c) Twenty-five percent by Direct Recruitment of Anganawadi Workers/ Female instructors of AW Training Centers possessing SSLC qualification with 10 years of continuous working experience as Anganawadi Workers/ Female instructors of AWTCs or Both.<br>Provided that if no sufficient number of eligible candidates | Notwithstanding, anything contained in the Karnataka Civil Services (General recruitment) Rules, 1977 in the case of direct recruitment under (b) and (c), the maximum age limit shall be relaxed to the extent of the period served as instructor, principal in the AWTCs and / OR Anganawadi worker subject to a maximum relaxation of Fifteen years and up to the age of forty-five years. |

| Sl. No. | CATEGORY OF POSTS & PAY SCALE | NO. OF POST | | | | METHOD OF RECRUITMENT | MINIMUM QUALIFICATION |
|---|---|---|---|---|---|---|---|
| | | P | T | D | TO TAL | | |
| (1) | (2) | (3) | | | | (4) | (5) |
| | | | | | | falling under clause (c) are not available, those vacancies shall be filled up by recruitment under clause (b) and if sufficient number of candidates under clause (b) and (c) are not available, these vacancies shall be filled up by Direct recruitment under clause(a). | |
| 20 | Pharmacist ***14550-26700*** | 0 | 1 | 0 | 1 | By deputation of official in the cadre of Pharmacists. from the Dept of Health and Family Welfare Services. | - |
| 21 | Senior Typists ***14550-26700*** | 0 | 21 | 0 | 21 | By Promotion:- From the cadre of Typists provided that a typist before promotion as Senior Typists, shall exercise as irrevocable option. | ***For Promotion:-*** Must have put in a service of Ten years as typists. |
| 22 | Senior Drivers. ***14550-26700*** | 0 | 21 | 0 | 21 | By Promotion from the Cadre of Drivers provided that a driver before promotion as Senior Driver, shall exercise as irrevocable option. | ***For Promotion:-*** Must have put in a service of Ten years as Drivers. |
| 23 | Gramasevikas/ Balasevikas ***12500-24000*** | 6 | 0 | 0 | 6 | - | - |
| 24 | Teachers ***12500-24000*** | 71 | 43 | 0 | 114 | - | - |
| 25 | P.T. Instructor (Teacher) ***12500-24000*** | 6 | 0 | 0 | 6 | - | - |
| 26 | Instructors inclusive of Junior Printing Instructor, Carpentry Instructor, Tailoring Instructor, Weaving Instructor, Craft Teacher, Spinning Instructor, Band Instructor, Basket making Instructor, Pattan Instructor, Foot-Rug making Instructor, Lady Weaving supervisor for Stree Samajas, Chappal making Instructor and Agricultural Instructor. ***12500-24000*** | 6 | 0 | 0 | 6 | - | - |

| Sl. No. | CATEGORY OF POSTS & PAY SCALE | NO. OF POST | | | | METHOD OF RECRUITMENT | MINIMUM QUALIFICATION |
|---|---|---|---|---|---|---|---|
| | | P | T | D | TO TAL | | |
| (1) | (2) | (3) | | | | (4) | (5) |
| 27 | Nurse (ANMS)<br>***11600-21000*** | 15 | 7 | 0 | 22 | By deputation of an official from the cadre of ANMs from the Department of Health and Family Welfare Services. | - |
| 28 | Second Division Assistants/ Store keeper<br>***11600-21000*** | 73 | 264 | 0 | 337 | Sixty seven percent by Direct Recruitment in accordance with Karnataka Civil Services (Recruitment to Ministerial Posts) Rules 1978.<br>&<br>Thirty-three percent by transfer from the cadre of Driver. If no suitable candidates are eligible in the cadre of Drivers for transfer, then by promotion from the cadre of Group D on the basis of combined seniority being determined by treating a person holding the post carrying a higher scale of pay as senior to a person holding the posts carrying a lower scale of pay. Seniority/ inter-se among the persons holding the posts carrying the same scale of pay being determined on the basis of the length of service in the respective cadres. | ***For Promotion :-***<br>Must have put in not less than 5 years in one or more cadres specified in Column No.4,<br>A Pass in SSLC or its equivalent examination. |
| 29 | Typist<br>***11600-21000*** | 30 | 77 | 0 | 107 | By Direct Recruitment:- In accordance with Karnataka Civil Service (Recruitment to the post of typists, Stenographers) Rules, 1983 | - |
| 30 | Data Operator/ Computer Operator<br>***11600-21000*** | 0 | 3 | 0 | 3 | By Direct Recruitment in accordance with Karnataka Civil Service (Direct recruitment by selection) (General) Rules, 2006. | A pass in SSLC or equivalent examination |
| 31 | House Father/ House Mother/ Matron.<br>***11600-21000*** | 78 | 47 | 0 | 125 | By Direct Recruitment in accordance with Karnataka Civil Service (Direct recruitment by selection) (General) Rules, 2006. | A pass in SSLC or equivalent examination |
| 32 | Drivers (including Driver(Toy train))<br>***11600-21000*** | 17 | 227 | 0 | 244 | By Direct Recruitment | A pass in SSLC or equivalent examination and valid light vehicle driving license. |

| Sl. No. | CATEGORY OF POSTS & PAY SCALE | NO. OF POST | | | | METHOD OF RECRUITMENT | MINIMUM QUALIFICATION |
|---|---|---|---|---|---|---|---|
| | | P | T | D | TO TAL | | |
| (1) | (2) | (3) | | | | (4) | (5) |
| 33 | Havaldar ***11600-21000*** | 2 | 0 | 0 | 2 | | |
| 34 | Group D including- Attender/Guard/ Mutchi/ Cook, ***10400-16400*** | 74 | 157 | 0 | 231 | By Promotion from the cadre of Peons/ Ayah/ Sweeper/ Cycle orderly/ Dhobi/ Night Watchman/ Packer-cum-Watchman/ Scavenger/ Washer Women on the basis of Combined Seniority. | Must have put in not less than five years of service in the cadre specified in Column 4. |
| 35 | Group D including- Peons/ Ayah/ Sweeper/ Cycle orderly/ Dhobi/ Night Watchman/ Packer-cum-Watchman/ Scavenger/ Washer Women. Electrician (Sound & electrical Sector), Assistant Projectionist. ***9600-14550*** | 73 | 645 | 0 | 718 | By Direct recruitment in accordance with Karnataka Civil Service (Direct recruitment by selection) (General) Rules, 2006 out of which Four percent by appointment of leprosy cured person. | ***For Direct Recruitment:*** 1. A pass in $7^{th}$ standard examination. Preference being given to the inmates and ex-inmates of correctional institutions and After-care Homes. No educational qualification is needed for appointment as Sweeper/ Scavenger. 2. For Leprosy cured persons: Pass in IV standard examination, certificate issued by the competent Authority as to the complete cure of the disease. |
| | ***TOTAL*** | ***757*** | ***5355*** | ***34*** | ***6146*** | | |

By Order and in the name of the Governor of Karnataka

***B.KAMALAMMA***
Under Secretary to Government-2,
Department of Women and Child Development
and Empowerment of Differently Abled
and Senior Citizens.


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – ***IV-A*** | ಬೆಂಗಳೂರು, ಗುರುವಾರ, ಜನವರಿ ೧೭, ೨೦೧೩ (ಪುಷ್ಯ ೨೭, ಶಕ ವರ್ಷ ೧೯೩೪) | ನಂ. ೫೧ |
| ***Part – IV-A*** | ***Bangalore, Thursday, January 17, 2013 (Pushya 27, Shaka Varsha 1934)*** | ***No. 51*** |


## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಇ 204 ಎಂಆರ್ಇ 2012, ಬೆಂಗಳೂರು, ದಿನಾಂಕ: 11.01.2013**

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 10(1)(i)**ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಅಧಿಸೂಚನೆ ಸಂಖ್ಯೆ: ಸಇ 104 ಎಂಆರ್ಇ 2009 ದಿನಾಂಕ: 20/01/2011 ರಲ್ಲಿ **ಸಾಗರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ** ಮಾಡಲಾಗಿದ್ದ ಈ ಕೆಳಕಂಡವರ ನಾಮನಿರ್ದೇಶನವನ್ನು **ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 10 ರಡಿಯಲ್ಲಿ** ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ.

| ಕ್ರಮ ಸಂಖ್ಯೆ | ಶ್ರೀ/ ಶ್ರೀಮತಿ | |
|---|---|---|
| 1. | ಶ್ರೀ ಸಿ.ಜೆ.ಮಂಜಪ್ಪ ಬಿನ್ ಗಣಪತಯ್ಯ ಚಿಕ್ಕತೋಟ, ಸಸರವಳ್ಳಿ ಅಂಚೆ, ಸಾಗರ ತಾಲ್ಲೂಕು | ಸದಸ್ಯರು |
| 2. | ಶ್ರೀ ತ್ಯಾಗಮೂರ್ತಿ ಬಿನ್ ಭಿರನಾಯ್ಕ ಬಿಲಕಂದೂರು, ಅರಳಗೋಡು ಅಂಚೆ, ಸಾಗರ ತಾಲ್ಲೂಕು. | ಸದಸ್ಯರು |
| 3. | ಶ್ರೀ ಮಹಾಬಲೇಶ್ವರ ಬಿನ್ ಕೃಷ್ಣಪ್ಪ, ಮಾಸೂರು ಗ್ರಾಮ ಮತ್ತು ಅಂಚೆ, ಸಾಗರ ತಾಲ್ಲೂಕು | ಸದಸ್ಯರು |
| 4. | ಶ್ರೀ ಗಣಪತಿ ಮತ್ತಿಕೊಪ್ಪ ಬಿನ್ ಗೋವಿಂದರಾವ್ ಕಲ್ಮನೆ, ಸಾಗರ ತಾಲ್ಲೂಕು. | ಸದಸ್ಯರು |
| 5. | ಶ್ರೀ ಚಂದ್ರಶೇಖರ್ ಬಿನ್ ಗಣಪತಿ ತಾಲಗುಪ್ಪ, ಸಾಗರ ತಾಲ್ಲೂಕು. | ಸದಸ್ಯರು |
| 6 | ಶ್ರೀ ಯು.ಹೆಚ್.ರಾಮಪ್ಪ ಬಿನ್ ಹೇರಂಬರಾವ್ ಅಗ್ರಹಾರ ಮುಚಡಿ, ಸಾಗರ. | ಸದಸ್ಯರು |
| 7. | ಶ್ರೀ ಕೆ.ವಿ.ನಾಗರಾಜ ಬಿನ್ ವೀರಪ್ಪ ಗೌಡ ತಮರಿಕೊಪ್ಪ, ಆನಂದಪುರ ಅಂಚೆ, ಸಾಗರ ತಾಲ್ಲೂಕು. | ಸದಸ್ಯರು |
| 8. | ಶ್ರೀ ಕಾಗೋಡು ಗಣಪತಿ ಬಿನ್ ಬಡಿಯಪ್ಪ, ಕಾಗೋಡು, ಸಾಗರ ತಾಲ್ಲೂಕು. | ಸದಸ್ಯರು |
| 9. | ಶ್ರೀ ಓಂಕಾರ್ ಜೈನ್ ಬಿನ್ ಶಾಂತರಾಜ್ ಚದರವಳ್ಳಿ, ಕಂದರವಳ್ಳಿ ಅಂಚೆ, ಸಾಗರ ತಾಲ್ಲೂಕು. | ಸದಸ್ಯರು |
| 10. | ಶ್ರೀ ತಿಮ್ಮಪ್ಪ ಬಿನ್ ಕಾಡಪ್ಪ ಹೊನ್ನಗೋಡು, ಬ್ರಾಹ್ಮಣ ಕೆಪ್ಪಗೆ ಅಂಚೆ, ಸಾಗರ ತಾಲ್ಲೂಕು. | ಸದಸ್ಯರು |
| 11. | ಶ್ರೀಮತಿ ಜಯ ಆರ್ ಪೈ ಕೋಂ ರಾಜೇಂದ್ರ ಪೈ ಚಾಮರಾಜಪೇಟೆ, ಸಾಗರ. | ಸದಸ್ಯರು |
| 12. | ಶ್ರೀ ಕೃಷ್ಣಮೂರ್ತಿ ಬಿನ್ ಗಣೇಶ ಭಟ್ ಕರ್ಕಿಕೊಪ್ಪ ಗ್ರಾಮ, ಯಡಗಜಿಳೆ ಮನೆ, ಸಾಗರ ತಾಲ್ಲೂಕು. | ಸದಸ್ಯರು |
| 13. | ಶ್ರೀ ಬಿ.ಎಸ್.ಸುಬ್ಬರಾವ್ ಬಿನ್ ಸೂರ್ಯನಾರಾಯಣಪ್ಪ, ಶ್ರೀಧರಪುರ, ಮಾಸೂರು ಅಂಚೆ, ಸಾಗರ ತಾಲ್ಲೂಕು. | ಸದಸ್ಯರು |

**ಪ್ರಕರಣ (10) (1) (ii) ರಡಿಯಲ್ಲಿ**

| | | |
|---|---|---|
| 14. | ಶ್ರೀ ವೆಂಕಟೇಶ್ ಬಿನ್ ಶಂಕರ ಭಟ್ ಕಲ್ಮನೆ ಗ್ರಾಮ ಮತ್ತು ಅಂಚೆ, ಸಾಗರ ತಾಲ್ಲೂಕು. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಈ. ಪಾಪಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ


| ಭಾಗ – IV-A | ಬೆಂಗಳೂರು, ಗುರುವಾರ, ಜನವರಿ ೧೭, ೨೦೧೩ (ಪುಷ್ಯ ೨೭, ಶಕ ವರ್ಷ ೧೯೩೪) | ನಂ. ೫೨ |
|---|---|---|
| *Part – IV-A* | *Bangalore, Thursday, January 17, 2013 (Pushya 27, Shaka Varsha 1934)* | *No. 52* |


## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 60 ಶಾಸನ 2012, ಬೆಂಗಳೂರು, ದಿನಾಂಕ: 17.01.2013**

The Karnataka Legislature Salaries, Pensions and Allowances (Third Amendment) Bill, 2012 - ಇದಕ್ಕೆ, 2013ರ ಜನವರಿ ಮಾಹೆಯ ಹದಿನೈದನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 08 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

***KARNATAKA ACT NO. 08 OF 2013***

(First published in the Karnataka Gazette Extra-ordinary on the Seventeenth day of January, 2013)

## *THE KARNATAKA LEGISLATURE SALARIES, PENSIONS AND ALLOWANCES (THIRD AMENDMENT) ACT, 2012*

(Received the assent of the Governor on the fifteenth day of January, 2013)

An Act further to amend the Karnataka Legislature Salaries, Pensions and Allowances Act, 1956.

Whereas it is expedient further to amend the Karnataka Legislature Salaries, Pensions and Allowances Act, 1956 (Karnataka Act 2 of 1957) for the purposes hereinafter appearing;

Be it enacted by the Karnataka State Legislature in the Sixty -third year of the Republic of India, as follows:-

***1. Short title and commencement.-*** (1) This Act may be called the Karnataka Legislature Salaries, Pensions and Allowances (Third Amendment) Act, 2012.

(2) It shall come into force at once.

***2. Amendment of section 11A.-*** In the Karnataka Legislature Salaries, Pensions and Allowances Act, 1956 (Karnataka Act 2 of 1957) (herein after referred to as the Principal Act), in section 11A, in sub-section (5), for clause (ii), the following shall be substituted, namely:-

"(ii) shall for every financial year be entitled to receive in such manner and subject to such conditions, as may be prescribed, a sum of rupees one lakh per annum payable in two equal installments in the months of April and October for the purpose of travelling either single or with a companion in one or more journeys by air or by railway in India."

***3. Amendment of section 11B.-*** In section 11B, of the Principal Act in sub-section (1), for the words "pension drawn" the words "pension admissible" shall be substituted.

***4. Amendment of section 12.-*** In section 12 of the Principal Act, in clause (c), after sub clause (iii) the following shall be inserted, namely:-

"(iv) Every person who is drawing family pension under section 11B shall be entitled to rupees two thousand per month as fixed medical allowance, subject to the condition that the amount already reimbursed through the medical reimbursement claim if any during the said month, shall be deducted from the fixed medical allowance."

By Order and in the name of the Governor of Karnataka,

***G.K. BOREGOWDA***
Secretary to Government,
Department of Parliamentary
Affairs and Legislation

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – *IV-A* | ಬೆಂಗಳೂರು, ಗುರುವಾರ, ಜನವರಿ ೧೭, ೨೦೧೩ (ಪುಷ್ಯ ೨೭, ಶಕ ವರ್ಷ ೧೯೩೪) | ನಂ. ೫೩ |
| ***Part – IV-A*** | ***Bangalore, Thursday, January 17, 2013 (Pushya 27, Shaka Varsha 1934)*** | ***No. 53*** |

## *KARNATAKA ELECTRICITY REGULATORY COMMISSION, BANGALORE-560 001*

***NOTIFICATION***

***No: KERC/D/37/13, Bangalore, Dated: 15.01.2013***

## *Draft KERC, (Consumer Grievance Redressal Forum and Ombudsman) (Second Amendment) Regulations, 2013.*

***Preamble***

In exercise of powers conferred on the Commission by Section 181 read with Sub-section (5), (6) and (7) of Section 42 of the Electricity Act 2003 (Act No 36 of 2003) and all powers enabling it in this behalf, the Karnataka Electricity Regulatory Commission had issued KERC (Consumer Grievance Redressal Forum and Ombudsman) Regulations 2004 (herein called as Principal Regulations) vide notification No: D/02/03 dated 12-05-2004 which were

